





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಆಕಾಶವು ಒಡೆದು ಸೀಳಾಗುವಾಗ,

اِذَا السَّمَآءُ انْفَطَرَتْ ①

2. ನಕ್ಷತ್ರಗಳು ಚದುರಿ ಹೋಗುವಾಗ,

وَاِذَا الْكَوَاكِبُ انْتَثَرَتْ ②

3. ಸಮುದ್ರಗಳು ಭೇದಿಸಲ್ಪಡುವಾಗ-

وَاِذَا الْبِحَارُ فُجِّرَتْ ③

4. ಮತ್ತು ಸಮಾಧಿಗಳು ತೆರೆಯಲ್ಪಡುವಾಗ,[1]

وَاِذَا الْقُبُوْرُ بُعْثِرَتْ ④

5. ಪ್ರತಿಯೊಬ್ಬ ವ್ಯಕ್ತಿಗೆ ತಾನು ಮುಂದೆ ಕಳುಹಿಸಿದ ಮತ್ತು ಹಿಂದೆ ಬಿಟ್ಟಿರುವ ಕರ್ಮಗಳೇನೆಂಬುದು ತಿಳಿದು ಬರುವುದು.

عَلِمَتْ نَفْسٌ مَّا قَدَّمَتْ وَاَخَّرَتْ ⑤

6. ಓ ಮಾನವ! ಆ ನಿನ್ನ ಕರುಣಾಮಯಿ ಪ್ರಭುವಿನ ಬಗ್ಗೆ ನಿನ್ನನ್ನು ಮೋಸಕ್ಕೊಳಪಡಿಸಿದ ವಸ್ತು ಯಾವುದು?

يٰۤاَيُّهَا الْاِنْسَانُ مَا غَرَّكَ بِرَبِّكَ الْكَرِيْمِ ⑥

7. ಅವನು ನಿನ್ನನ್ನು ಸೃಷ್ಟಿಸಿದನು, ನಿನ್ನನ್ನು ನಖಶಿಖಾಂತ ಸರಿಪಡಿಸಿದನು, ನಿನ್ನನ್ನು ಸಂತುಲಿತಗೊಳಿಸಿದನು,

الَّذِيْ خَلَقَكَ فَسَوّٰىكَ فَعَدَلَكَ ⑦

8. ತಾನಿಚ್ಛಿಸಿದ ರೂಪದಲ್ಲಿ ನಿನ್ನನ್ನು ಜೋಡಿಸಿ ರಚಿಸಿದನು.

فِيْۤ اَيِّ صُوْرَةٍ مَّا شَآءَ رَكَّبَكَ ⑧

9. ಖಂಡಿತ ಅಲ್ಲ,[2] ವಾಸ್ತವದಲ್ಲಿ ನೀವು ಕರ್ಮಫಲವನ್ನು ಅಲ್ಲಗಳೆಯುತ್ತೀರಿ-[3]

كَلَّا بَلْ تُكَذِّبُوْنَ بِالدِّيْنِ ⑨

1. ಸಮಾಧಿಗಳು ತೆರೆಯಲ್ಪಡುವುದೆಂದರೆ ಜನರನ್ನು ಮತ್ತೊಮ್ಮೆ ಜೀವಂತಗೊಳಿಸಿ ಎಬ್ಬಿಸಲಾಗುವುದು.
2. ಅರ್ಥಾತ್- ಈ ರೀತಿಯ ಮೋಸಕ್ಕೆ ಗುರಿಯಾಗಲು ಯಾವುದೇ ಸೂಕ್ತ ಕಾರಣಗಳಿಲ್ಲ.
3. ಅರ್ಥಾತ್- ಯಾವ ವಸ್ತು ನಿಮ್ಮನ್ನು ಮೋಸಕ್ಕೀಡು ಮಾಡಿದೆಯೋ ಅದು ಸೂಕ್ತವಾದ ಆಧಾರವಲ್ಲ. ಬದಲಾಗಿ ಲೋಕದ ಈ ಕರ್ಮಭೂಮಿಯ ನಂತರ ಪ್ರತಿಫಲದ ಲೋಕವೆಂಬುದಿಲ್ಲ ಎಂಬ ನಿಮ್ಮ ಮೂರ್ಖತನದಿಂದ ಕೂಡಿದ ಭಾವನೆಯೇ ಇದಕ್ಕೆ

10. ವಸ್ತುತಃ ನಿಮ್ಮ ಮೇಲೆ ಕಾವಲುಗಾರರು ನಿಯುಕ್ತರಾಗಿರುವರು-

وَإِنَّ عَلَيْكُمْ لَحَٰفِظِينَ ﴿١٠﴾

11. ಗೌರವಾನ್ವಿತ ಬರಹಗಾರರು-

كِرَامًا كَٰتِبِينَ ﴿١١﴾

12. ನಿಮ್ಮ ಪ್ರತಿಯೊಂದು ಕೃತ್ಯವನ್ನೂ ಬಲ್ಲವರು.

يَعْلَمُونَ مَا تَفْعَلُونَ ﴿١٢﴾

13. ನಿಸ್ಸಂದೇಹವಾಗಿಯೂ ಸಜ್ಜನರು ಪರಮಸುಖದಲ್ಲಿರುವರು.

إِنَّ الْأَبْرَارَ لَفِي نَعِيمٍ ﴿١٣﴾

14. ಮತ್ತು ಖಂಡಿತವಾಗಿಯೂ ದುಷ್ಕರ್ಮಿಗಳು ನರಕಾಗ್ನಿಯಲ್ಲಿರು ವರು.

وَإِنَّ الْفُجَّارَ لَفِي جَحِيمٍ ﴿١٤﴾

15. ಪ್ರತಿಫಲದ ದಿನ ಅವರು ಅದರೊಳಗೆ ಪ್ರವೇಶಿಸುವರು.

يَصْلَوْنَهَا يَوْمَ الدِّينِ ﴿١٥﴾

16. ಮತ್ತು ಅದರಿಂದ ಖಂಡಿತ ಮಾಯವಾಗಲಾರರು.

وَمَا هُمْ عَنْهَا بِغَآئِبِينَ ﴿١٦﴾

17. ಪ್ರತಿಫಲದ ಆ ದಿನ ಏನೆಂಬುದು ನಿಮಗೇನು ಗೊತ್ತು?

وَمَآ أَدْرَىٰكَ مَا يَوْمُ الدِّينِ ﴿١٧﴾

18. ಹೌದು, ಪ್ರತಿಫಲದ ಆ ದಿನ ಏನೆಂಬುದು ನಿಮಗೇನು ಗೊತ್ತು?

ثُمَّ مَآ أَدْرَىٰكَ مَا يَوْمُ الدِّينِ ﴿١٨﴾

19. ಅದು ಯಾರೂ ಯಾರಿಗೂ ಏನನ್ನೂ ಮಾಡಲು ಸಾಧ್ಯವಾಗದ ದಿನ. ಅಂದು ತೀರ್ಮಾನವೆಲ್ಲವೂ ಸರ್ವಸಂಪೂರ್ಣವಾಗಿ ಅಲ್ಲಾಹನ ಅಧಿಕಾರದಲ್ಲಿರುವುದು.

يَوْمَ لَا تَمْلِكُ نَفْسٌ لِّنَفْسٍ شَيْـًٔا ۖ وَالْأَمْرُ يَوْمَئِذٍ لِّلَّهِ ﴿١٩﴾

---

ಕಾರಣವಾಗಿದೆ. ಈ ನಿರಾಧಾರವಾದ ತಪ್ಪುಕಲ್ಪನೆಯಿಂದಾಗಿಯೇ ನೀವು ದೇವನಿಂದ ಅಲಕ್ಷ್ಯರಾಗಿದ್ದೀರಿ, ಅವನ ನ್ಯಾಯದ ಬಗ್ಗೆ ನಿರ್ಭಯರಾಗಿದ್ದೀರಿ ಮತ್ತು ನಿಮ್ಮ ನೈತಿಕ ಧೋರಣೆಯ ಬಗ್ಗೆ ಹೊಣೆಗೇಡಿಗಳಾಗಿದ್ದೀರಿ.